# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1398
2. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಡಾ॥ ವೈ.ಎ.ನಾರಾಯಣ ಸ್ವಾಮಿ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 23.09.2021
4. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಾದಕ ದ್ರವ್ಯ ಬಳಕೆ ಮತ್ತು ಸೇವನೆಯ ಪ್ರಕರಣಗಳು ದಿನೇ ದಿನೇ ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಜ್ಯದಲ್ಲಿ ಮಾದಕ ದ್ರವ್ಯ ಬಳಕೆ ಮತ್ತು ಸೇವನೆಯ ಪ್ರಕರಣಗಳು ವರದಿಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಕಳೆದ 2019, 2020 ಮತ್ತು 2021ರ ಆಗಸ್ಟ್ ಅಂತ್ಯಕ್ಕೆ ರಾಜ್ಯದಲ್ಲಿ ಎನ್‌ಡಿಪಿಎಸ್ ಕಾಯ್ದೆ ಅಡಿಯಲ್ಲಿ ದಾಖಲಾದ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿರುತ್ತದೆ.<br><br>ವರ್ಷ – ದಾಖಲಾದ ಪ್ರಕರಣಗಳ ಸಂಖ್ಯೆ<br>2019 – 1661<br>2020 – 4066<br>2021 (ಆಗಸ್ಟ್) – 3673 |
| ಆ | ಡ್ರಗ್ಸ್ ನಿಯಂತ್ರಣ ಕಾಯ್ದೆಯಡಿ ಈವರೆಗೆ ಕ್ರಮ ಕೈಗೊಳ್ಳಲಾದ ಪ್ರಕರಣಗಳು ಹಾಗೂ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ವಿವರಿಸಿ: | ಡ್ರಗ್ಸ್ ನಿಯಂತ್ರಣ ಕಾಯ್ದೆಯಡಿಯಲ್ಲಿ 2019ನೇ ಸಾಲಿನಿಂದ 2021(ಆಗಸ್ಟ್)ರ ವರೆಗೆ ಒಟ್ಟು 9400 ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. ಇವುಗಳ ಪೈಕಿ 7515 ಪ್ರಕರಣಗಳಲ್ಲಿ ಆರೋಪಿಗಳ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ.<br><br>ಮಾನ್ಯ ನ್ಯಾಯಾಲವು 1389 ಪ್ರಕರಣಗಳಲ್ಲಿ ಆರೋಪಿಗಳಿಗೆ ಶಿಕ್ಷೆಯನ್ನು ವಿಧಿಸಿರುತ್ತದೆ. |
| ಇ | ಡ್ರಗ್ಸ್ ಮಾರಾಟವನ್ನು ನಿಯಂತ್ರಣಕ್ಕೆ ತರಲು ಕಟ್ಟುನಿಟ್ಟಿನ ಕ್ರಮಕೈಗೊಳ್ಳಲು ಸರ್ಕಾರ ಮುಂದಾಗುವುದೇ: | **ಡ್ರಗ್ಸ್ ಮಾರಾಟವನ್ನು ನಿಯಂತ್ರಣಕ್ಕೆ ತರಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.**<br>➢ ಮಾದಕ ದ್ರವ್ಯ ಪದಾರ್ಥಗಳ ವಹಿವಾಟನ್ನು ತಡೆಗಟ್ಟಲು ಹಾಗೂ ಪತ್ತೆಮಾಡಲು ಮತ್ತು ಹದಿಹರೆಯದ ಯುವಕ ಯುವತಿಯರನ್ನು ಇಂತಹ ದುಶ್ಚಟಗಳಿಂದ ತಡೆಗಟ್ಟುವ ಸಲುವಾಗಿ ಎಲ್ಲಾ ರೀತಿಯಲ್ಲಿ ಸಾಧ್ಯವಿರುವ ಪ್ರಯತ್ನಗಳನ್ನು ಮಾಡಲಾಗುತ್ತಿದೆ. |

| | | |
|---|---|---|
| | | ➢ ರಾಜ್ಯದಲ್ಲಿ ಸಾರ್ವಜನಿಕರು ಮಾದಕ ವಸ್ತುಗಳ ಸಾಗಟಣೆ/ವ್ಯಸನದ ಬಗ್ಗೆ ರಹಸ್ಯ ಮಾಹಿತಿಗಳನ್ನು ಟೋಲ್ ಫ್ರೀ ಸಂಖ್ಯೆ 1908 ದೂರವಾಣಿಯ ಮುಖಾಂತರ ಸಂಪರ್ಕಿಸಿ ಮಾಹಿತಿ ನೀಡುವ ಸೌಲಭ್ಯವನ್ನು ಒದಗಿಸಲಾಗಿರುತ್ತದೆ.<br>➢ ಮಾದಕ ವಸ್ತುಗಳು ಸರಬರಾಜು ಆಗುವ ಮಾರ್ಗಗಳ ಮೇಲೆ ತೀವ್ರ ನಿಗಾವಣೆ ಇಡಲಾಗಿದೆ.<br>➢ ಡಾರ್ಕ್ ನೆಟ್ (Darknet), ಮುಖಾಂತರ ಡ್ರಗ್ಸ್ ಸರಬರಾಜು ಜಾಲವನ್ನು ಪತ್ತೆ ಮಾಡಿ ಕಾನೂನು ಕ್ರಮ ಕೈಗೊಳ್ಳಲಾಗಿರುತ್ತದೆ.<br>➢ ವಿದೇಶಗಳಿಂದ ಪೋಸ್ಟಲ್/ಕೊರಿಯರ್ಸ್ ಮುಖಾಂತರ ಡ್ರಗ್ಸ್ ಸರಬರಾಜು ಮಾಡುತ್ತಿದ್ದ ಜಾಲಗಳ ಮೇಲೆ ನಿಗಾ ಇಡಲಾಗಿದೆ.<br>➢ ರಾಜ್ಯದಲ್ಲಿ ಡ್ರಗ್ಸ್ ಅಕ್ರಮಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುವ ಸಲುವಾಗಿ NCB, DRI, Customs, Railway, Education ಇಲಾಖೆಗಳ ಅಧಿಕಾರಿಗಳ ಸಮನ್ವಯ ಸಭೆಯನ್ನು ನಡೆಸಲಾಗಿದೆ.<br>➢ ಮಾದಕ ವಸ್ತುಗಳ ಅಕ್ರಮ ಸಾಗಾಣಿಕೆ ಮತ್ತು ಮಾರಾಟ ತಡೆಗಟ್ಟುವ ಸಲುವಾಗಿ, ಠಾಣಾ ಮಟ್ಟದಲ್ಲಿ ಬಾತ್ಮಿದಾರರಿಂದ ಗೌಪ್ಯ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ.<br>➢ ಅಧಿಕಾರಿ ಸಿಬ್ಬಂದಿಗಳಿಗೆ ಮಾದಕ ದ್ರವ್ಯ (ಡ್ರಗ್ಸ್)ಗಳ ಮಾರಾಟ ಮತ್ತು ಸೇವಿಸುವವರ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ, ತಲೆಮರೆಸಿಕೊಂಡಿರುವ ಆರೋಪಿಗಳನ್ನು ಪತ್ತೆಹಚ್ಚಲು ಸೂಚಿಸಲಾಗಿದೆ.<br>➢ ಮಾದಕ ವಸ್ತುಗಳ ಕಾಯ್ದೆ ಅಡಿಯಲ್ಲಿ ದಾಖಲಾಗಿರುವ ಪ್ರಕರಣಗಳ ತನಿಖೆಯಲ್ಲಿ ವೈಜ್ಞಾನಿಕ ವಿಧಾನಗಳನ್ನು ಅನುಸರಿಸಲು ತನಿಖಾಧಿಕಾರಿಗಳಿಗೆ ಅಗತ್ಯ ತರಬೇತಿ ಕಾರ್ಯಾಗಾರಗಳನ್ನು ಆಯೋಜಿಸಲಾಗುತ್ತಿದೆ.<br>➢ ಬಾರ್ ಮತ್ತು ರೆಸ್ಟೋರೆಂಟ್, ಕಾಫಿ–ಡೇ, ಪಬ್, ಡಾನ್ಸ್‌ಬಾರ್ ಮುಂತಾದ ಯುವಕರು ಹೆಚ್ಚಾಗಿ ಸೇರುವ ಸ್ಥಳಗಳು, ಶಾಲಾ ಕಾಲೇಜು ಆವರಣ, ಬಸ್ ನಿಲ್ದಾಣ ಹಾಗೂ ಇನ್ನಿತರೆ ಪ್ರದೇಶಗಳಲ್ಲಿ ಮಾದಕ ದ್ರವ್ಯ ವಸ್ತುಗಳನ್ನು ಮಾರಾಟ ಮಾಡುತ್ತಿರುವ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ಕಾನೂನಿನ ರೀತಿ ಕ್ರಮ ಜರುಗಿಸಲಾಗುತ್ತಿದೆ.<br>➢ ಮಾದಕ ದ್ರವ್ಯ ವ್ಯಸನದ ದುಷ್ಪರಿಣಾಮದ ಕುರಿತು ಸಾರ್ವಜನಿಕರ ಗಮನ ಸೆಳೆಯಲು ಬ್ಯಾನರ್, ಪೋಸ್ಟರ್‌ಗಳನ್ನು ಜನಸಂದಣಿ ಇರುವ ಸ್ಥಳಗಳಲ್ಲಿ ಪ್ರದರ್ಶಿಸಿ ಅರಿವು ಮೂಡಿಸಲಾಗಿರುತ್ತದೆ. |

| | | |
|---|---|---|
| | | ➢ ವಿದೇಶಿಯರು ವಿಶೇಷವಾಗಿ ನೈಜೀರಿಯ ಪ್ರಜೆಗಳು ಮಾದಕ ವಸ್ತುಗಳ ಮಾರಾಟ/ಸೇವನೆಯ ಪ್ರಕರಣಗಳಲ್ಲಿ ಆರೋಪಿಗಳಿಗೆ ಯಾವ ಮೂಲಗಳಿಂದ ಮಾದಕ ವಸ್ತುಗಳು ಸರಬರಾಜಾಗುತ್ತಿರುವ ಬಗ್ಗೆ ಸಂಪೂರ್ಣ ಮಾಹಿತಿ ಸಂಗ್ರಹಿಸಲು ಸೂಚಿಸಲಾಗಿರುತ್ತದೆ.<br>➢ ಕೊಳಚೆ ಪ್ರದೇಶಗಳಲ್ಲಿ ಸಾರ್ವಜನಿಕ ಸಭೆ, ಮೆರವಣಿಗೆಗಳನ್ನು ನಡೆಸುವುದರ ಮೂಲಕ ವ್ಯಾಪಕ ಪ್ರಚಾರ ಕೈಗೊಳ್ಳಲು ಹಾಗೂ ಸಾರ್ವಜನಿಕರಲ್ಲಿ ಮಾದಕ ವಸ್ತುಗಳ ಸೇವನೆ ವಿರುದ್ಧ ಜಾಗೃತಿ ಮೂಡಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br>➢ ಮಾದಕ ದ್ರವ್ಯದ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಶಾಲಾ-ಕಾಲೇಜುಗಳಲ್ಲಿ ಡ್ರಗ್ ಅವೇರ್‌ನೆಸ್ ಪ್ರೋಗ್ರಾಮ್ ಅನ್ನು ನಡೆಸಿ, ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಠಾಣಾ ಸರಹದ್ದಿನ ಬೀಟ್ ಮತ್ತು ಸಬ್-ಬೀಟ್‌ಗಳಲ್ಲಿ ಆಗ್ಗಿಂದಾಗ್ಗೆ ಸಭೆಯನ್ನು ನಡೆಸಿ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>➢ ಡ್ರಗ್ ಅಪರಾಧ ಕೃತ್ಯಗಳಲ್ಲಿ ತೊಡಗಿರುವ ವಿದೇಶಿಯರನ್ನು ದಸ್ತಗಿರಿ ಮಾಡಿ ಅವರುಗಳ ಪಾಸ್‌ಪೋರ್ಟ್‌ಗಳನ್ನು ಮುಟ್ಟುಗೋಲು ಹಾಕಿಕೊಂಡು ಕಾನೂನಿನ ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ವಿದೇಶಿಯರು ವಾಸದ ಬಗ್ಗೆ ಮಾಹಿತಿಯನ್ನು ಸಂಬಂಧಪಟ್ಟ ಪೊಲೀಸ್ ಠಾಣೆಗಳಿಗೆ ಒದಗಿಸುವಂತೆ ಸುತ್ತೋಲೆಯ ಮೂಲಕ ನಿರ್ದೇಶನ ನೀಡಲಾಗಿದೆ.<br>➢ ಒಂದು ಬಾರಿಗಿಂತ ಹೆಚ್ಚು ಬಾರಿ ಎನ್.ಡಿ.ಪಿ.ಎಸ್. ಪ್ರಕರಣಗಳಲ್ಲಿ ಬಾಗಿಯಾದ ಆರೋಪಿತರಿಗೆ PIT-NDPS ಹಾಗೂ ಗೂಂಡಾ ಕಾಯ್ದೆ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಲು ಕ್ರಮ ಕೈಗೊಳ್ಳಲಾಗಿದೆ.<br>➢ ಠಾಣಾ ಸರಹದ್ದುಗಳಲ್ಲಿ ಹೊಯ್ಸಳ, ಚೀತಾ, ಅಧಿಕಾರಿ ಮತ್ತು ಸಿಬ್ಬಂದಿಗಳು ಗಸ್ತಿನಲ್ಲಿರುವ ಸಮಯದಲ್ಲಿ ಶಾಲಾ, ಕಾಲೇಜುಗಳ ಬಳಿ ಸೂಕ್ಷ್ಮವಾಗಿ ಗಮನಿಸಿ ಅಪರಿಚಿತ ವ್ಯಕ್ತಿಗಳ ಮಾಹಿತಿ ಸಂಗ್ರಹಿಸುವಂತೆ ಸೂಚಿಸಲಾಗಿದೆ.<br>➢ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿಗಳಲ್ಲಿ, ಡಾಬಾಗಳು ಮತ್ತು ಹೋಟೇಲ್‌ಗಳಲ್ಲಿ ಅನಿರೀಕ್ಷಿತ ತಪಾಸಣೆ ಮಾಡಲಾಗುತ್ತಿದೆ.<br>➢ ಪ್ರತಿ ವರ್ಷ ಜೂನ್-26 ರಂದು ಅಂತರಾಷ್ಟ್ರೀಯ ಮಾದಕ ವಸ್ತು ಸೇವನೆ ವಿರೋಧಿ ದಿನವನ್ನಾಗಿ ಆಚರಣೆ ಮಾಡುತ್ತಿದ್ದು ಈ ಸಂಬಂಧ ಠಾಣಾಧಿಕಾರಿಗಳು ತಮ್ಮ ಠಾಣಾ ವ್ಯಾಪ್ತಿಯಲ್ಲಿ ಬರುವ ಶಾಲಾ ಕಾಲೇಜುಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳಿಗೆ |

| | | |
|---|---|---|
| | | ಮಾದಕ ವಸ್ತುಗಳ ಸೇವನೆಯಿಂದ ಉಂಟಾಗುವ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸಿ ಮಾದಕ ವಸ್ತುಗಳನ್ನು ಸೇವನೆ ಮಾಡದಂತೆ ಅವರುಗಳಿಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಲಾಗುತ್ತಿದೆ.<br>➢ ಪ್ರಮುಖವಾಗಿ ಪಟ್ಟಣ ಪ್ರದೇಶಗಳಲ್ಲಿ ಶಾಲಾ ಕಾಲೇಜು, ನರ್ಸಿಂಗ್ ಕಾಲೇಜುಗಳ, ಹಾಸ್ಟಲ್‌ಗಳ, ಪ್ರವಾಸಿ ತಾಣಗಳ ಸಮೀಪ ನಡೆಸುತ್ತಿರುವ ಹೋಟೇಲ್/ಡಾಭಾಗಳ, ಪೆಟ್ಟಿಗೆ ಅಂಗಡಿಗಳ, ಚಹಾ ಅಂಗಡಿಯ ಮಾಲೀಕರಿಗೆ ಮಾದಕ ವಸ್ತುಗಳನ್ನು ಮಾರಾಟ ಮಾಡದಂತೆ ಸೂಕ್ತ ಎಚ್ಚರಿಕೆಗಳನ್ನು ನೀಡಲಾಗಿರುತ್ತದೆ.<br>➢ ಔಷಧ ನಿಯಂತ್ರಣ ಇಲಾಖೆಯೊಂದಿಗೆ ಸಂಪರ್ಕಿಸಿ ಅನಧಿಕೃತವಾದ ಮಾದಕ ಔಷಧಿಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿಕೊಂಡು ಅಂತಹ ಅನಧಿಕೃತ ಔಷಧಿಗಳ ಸಂಗ್ರಹ, ಮಾರಾಟ, ಉತ್ಪಾದನೆ ಬಗ್ಗೆ ಮಾಹಿತಿ ಪಡೆದು ಕಾನೂನು ಕ್ರಮ ಜರುಗಿಸಲು ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.<br>➢ ಸಾಮಾಜಿಕ ಜಾಲತಾಣ ಮುಖಾಂತರವಾಗಿ ಎಸ್‌ಎಂಎಸ್/ ವ್ಯಾಟ್ಸ್ಯಾಪ್ ಹಾಗೂ ಇನ್ನಿತರೇ ರೂಪದಲ್ಲಿ ಯುವ ಜನತೆಗೆ ತಲುಪುವ ರೀತಿಯಲ್ಲಿ ಮಾದಕ ವಸ್ತುಗಳ ಸೇವನೆಯಿಂದ ಆರೋಗ್ಯದ ಮೇಲೆ ಆಗುವ ದುಷ್ಪರಿಣಾಮಗಳ ಬಗ್ಗೆ ತಿಳಿಸಲಾಗುತ್ತಿದೆ.<br>➢ ನಗರಗಳಲ್ಲಿ ನಡೆಯುವ ಪಾರ್ಟಿ, ಈವೆಂಟ್‌ಗಳಲ್ಲಿ ಭಾಗವಹಿಸುವವರ ಮತ್ತು ಆಯೋಜಕರ ಮೇಲೆ ನಿಗಾ ಇಟ್ಟು ಇಂತಹ ಕಾರ್ಯಕ್ರಮಗಳಲ್ಲಿ ಮಾದಕ ವಸ್ತುಗಳ ಬಳಕೆಯಾಗದಂತೆ ಕಟ್ಟು ನಿಟ್ಟಿನ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ಡ್ರಗ್ಸ್ ನಿಯಂತ್ರಣದ ಬಗ್ಗೆ ಇರುವ ಕಾಯ್ದೆ ತಿದ್ದುಪಡಿ ತರಲು ಸರ್ಕಾರ ಕ್ರಮವಹಿಸುವುದೇ? (ವಿವರಗಳನ್ನು ತಿಳಿಸುವುದು) | ಡ್ರಗ್ಸ್ ನಿಯಂತ್ರಣ ಕುರಿತು ಸರ್ಕಾರವು ಕಾಲಕಾಲಕ್ಕೆ ಕಾಯ್ದೆಯ ತಿದ್ದುಪಡಿಯನ್ನು ತರುತ್ತಿದ್ದು ಸದರಿ ಕಾಯ್ದೆಯಡಿ ಡ್ರಗ್ಸ್ ದಂದೆಯನ್ನು ಸಮರ್ಥವಾಗಿ ನಿಯಂತ್ರಿಸಬಹುದಾಗಿರುತ್ತದೆ. |

ಒಇ 23 ಪಿಎನ್‌ಡಿ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು